# ಹಂತವಾರು ಕಲಿಕೆಗೆ ಸಾಮರ್ಥ್ಯವಾರು ಗುಂಪು ರಚನೆ

ನವನೀತ್ ಬೇಡರ್

***

ಕೋವಿಡ್ 19 ನಮ್ಮ ಸುತ್ತಮುತ್ತಲಿನ ಪ್ರತಿಯೊಂದರ ಮೇಲೆಯೂ ಪ್ರಭಾವ ಬೀರಿದೆ. ನಮ್ಮ ಆರ್ಥಿಕತೆಯ ಮೇಲೆ ಗಾಢ ಪ್ರಭಾವ ಬೀರಿದ್ದರೂ, ಅದರಿಂದ ಹೊರಬರುವುದು ಒಂದರ್ಥದಲ್ಲಿ ಸುಲಭವಾಗಿದ್ದರೂ, ಶಿಕ್ಷಣದ ಮೇಲೆ, ಮಕ್ಕಳ ಕಲಿಕೆಯ ಮೇಲೆ ಅಧಿಕವಾಗಿಯೇ ಪ್ರಭಾವ ಬೀರಿದೆ. ಅಲ್ಲದೆ, ಅದರ ಪರಿಣಾಮಗಳನ್ನು ಮುಂದಿನ ತಲೆಮಾರುಗಳೂ ಅನುಭವಿಸಬೇಕಾಗುತ್ತದೆ. ಆತಂಕ ಮತ್ತು ಅನಿಶ್ಚಿತ ವಾತಾವರಣದ ಮಧ್ಯೆ ಶಾಲೆಗಳು ಮುಚ್ಚಿದವು, ಆರಂಭದ ಕೆಲವು ತಿಂಗಳುಗಳಲ್ಲಿ ಸಂಪನ್ಮೂಲದ ಕೊರತೆಯಿಂದಾಗಿ ವಿದ್ಯಾರ್ಥಿಗಳನ್ನು ಸಂಪರ್ಕಿಸುವುದು ಶಿಕ್ಷಕರಿಗೆ ಅಸಾಧ್ಯವಾಯಿತು. ದೀರ್ಘಾವಧಿವರೆಗೆ ಶಾಲೆಗಳು ಮುಚ್ಚಿದ್ದಿದ್ದು ಮಕ್ಕಳ ಕಲಿಕೆಯ ಮೇಲೆ ಎರಡು ರೀತಿಯಲ್ಲಿ ಪರಿಣಾಮ ಬೀರಿತು- ದೈನಂದಿನ ಕಲಿಕೆಯಲ್ಲಿ ವ್ಯತ್ಯಯವಾಗಿದ್ದಲ್ಲದೆ ಅದು ಏಕಾಏಕಿ ನಿಂತೂ ಹೋಯಿತು. ಎರಡನೆಯದಾಗಿ, ಶಾಲೆಗಳು ನಿರಂತರವಾಗಿ ನಡೆಯದೇ ಇದ್ದುದರಿಂದ, ಈ ಹಿಂದೆ ಕಲಿತಿದ್ದುದ್ದನ್ನು ಮಕ್ಕಳು ಮರೆಯಲಾರಂಭಿಸಿರು. ಇಲ್ಲಿ, ಇದನ್ನು ಒಂದು ಉದಾಹರಣೆಯೊಂದಿಗೆ ಅರ್ಥೈಸಿಕೊಳ್ಳಲು ಯತ್ನಿಸಲಾಗಿದೆ.

2020ರ ಮಾರ್ಚ್‌ನಲ್ಲಿ, ಕರೀಮ್  ಒಂದನೇ ತರಗತಿ ಉತ್ತೀರ್ಣನಾಗಿದ್ದ. ಒಂದನೇ ತರಗತಿಯಲ್ಲಿ ಅವನು 50 ರವರೆಗೆ ಎಣಿಸುವುದನ್ನು, ಇಂಗ್ಲಿಷ್ ಮತ್ತು ಹಿಂದಿಯ ಅಕ್ಷರಗಳನ್ನು ಗುರುತಿಸುವುದನ್ನು ಮತ್ತು ಮಾತ್ರೆಗಳುಳ್ಳ ಹಿಂದಿಯ ಸರಳ ಪದಗಳನ್ನು ಗುರುತಿಸಲು ಕಲಿತಿದ್ದ. ’ರಿಮ್‌ಝಿಮ್’ ಪಠ್ಯಪುಸ್ತಕದಿಂದ ಕೆಲವು ಪಾಠಗಳನ್ನೂ ಅವನು ಓದಬಲ್ಲವನಾಗಿದ್ದ. ಕೆಲವು ಕೂಡುವ ಮತ್ತು ಕಳೆಯುವ ಲೆಕ್ಕಗಳ ಅಭ್ಯಾಸವನ್ನೂ ಮಾಡಿದ್ದ. ಕೆಲವು ಮಗ್ಗಿಗಳನ್ನೂ ಬಾಯಿಪಾಠ ಮಾಡಿಕೊಂಡಿದ್ದ. ಪಠ್ಯಪುಸ್ತಕದ್ದಲ್ಲದೆ, ಹೊರಗಿನ ಕೆಲವು ಹಿಂದಿ ಪದಗಳನ್ನೂ ಓದಬಲ್ಲವನ್ನಾಗಿದ್ದ. ಇಂಗ್ಲಿಷ್‌ನ ದೊಡ್ಡ ಮತ್ತು ಸಣ್ಣ ಅಕ್ಷರಗಳನ್ನು (ಕ್ಯಾಪಿಟಲ್ ಮತ್ತು ಸ್ಮಾಲ್ ಲೆಟರ್) ಬರೆಯುವುದೂ ಅವನಿಗೆ ತಿಳಿದಿತ್ತು. ‘cat’,

‘mat’, ‘hat’, ‘rat’ ನಂತಹ ಪದಗಳನ್ನು ಬರೆದು ಓದಲು ಅವನಿಗೆ ತಿಳಿದಿತ್ತು. 'sit down', 'stand up', 'come in' ನಂತಹ ವ್ಯಾಕರಣದ ಶಬ್ದಗಳನ್ನು ಬಳಸಿ ಮಾಡಿದ ವಾಕ್ಯಗಳನ್ನೂ ಅರ್ಥ ಮಾಡಿಕೊಳ್ಳುವುದು ಸಾಧ್ಯವಾಗಿತ್ತು. ಇಂಗ್ಲಿಷ್‌ನ ಕೆಲವು ನರ್ಸರಿ ರೈಮ್‌ಗಳನ್ನೂ ಕಲಿತಿದ್ದ.

2020-21ನೇ ಅಕಾಡೆಮಿಕ್ ಸಾಲಿನಲ್ಲಿ ಯಾವುದೇ ರೀತಿಯ ಪರೀಕ್ಷೆಗಳಿಲ್ಲದೆ ಅವನು ಎರಡನೇ ತರಗತಿಯ ವಿದ್ಯಾರ್ಥಿಯಾಗಿದ್ದ. ಶಾಲೆಗಳು ಕಾರ್ಯನಿರ್ವಹಿಸದೇ ಇದ್ದುದರಿಂದ ಅವನು ಶಾಲೆಗೆ ಹೋಗಲಿಲ್ಲ ಆದರೆ ಆಗಸ್ಟ್ ತಿಂಗಳಲ್ಲಿ ಸಮುದಾಯ ಕಲಿಕಾ ಕೇಂದ್ರಗಳ ಮೂಲಕ ಆರಂಭವಾಗಿದ್ದ ಬೋಧನೆ ಮತ್ತು ಕಲಿಕೆಯ ಪ್ರಕ್ರಿಯೆಯಲ್ಲಿ ನಿಯಮಿತವಾಗಿ ಪಾಲ್ಗೊಳ್ಳಲು ಅವನಿಗೆ ಸಾಧ್ಯವಾಗಲಿಲ್ಲ. ಇದೇ ವೇಳೆ, ಅವನ ಗ್ರಾಮವನ್ನು ಕಂಟೈನ್‌ಮೆಂಟ್ ವಲಯ ಎಂದು ಎರಡು ಬಾರಿ ಘೋಷಿಸಿದ ಕಾರಣ, ಸಮುದಾಯ ಕಲಿಕಾ ಕೇಂದ್ರಕ್ಕೆ ಹೋಗುವುದಕ್ಕೂ ಸಾಧ್ಯವಾಗಲಿಲ್ಲ. ವರ್ಷದಲ್ಲಿ ಎರಡೋ- ಮೂರೋ ತಿಂಗಳು ಸಮುದಾಯ ಕಲಿಕಾ ಕೇಂದ್ರ ನಡೆಯಿತು. ಕರೀಮ್ಗೆ ತನ್ನ ಶೇಕಡಾ 20 ರಿಂದ 30ರಷ್ಟು ಸಮಯವನ್ನಷ್ಟೇ ಔಪಚಾರಿಕ ಕಲಿಕೆಗೆ/ಶಾಲೆಗೆ ವಿನಿಯೋಗಿಸಲು ಸಾಧ್ಯವಾಯಿತು. ಅವನು ಸಮುದಾಯ ಕಲಿಕಾ ಕೇಂದ್ರದಲ್ಲಿ ಎರಡನೇ ತರಗತಿಯ ಪಾಠಗಳನ್ನು ಕಲಿಯುವಾಗ, ಒಂದನೇ ತರಗತಿಯಲ್ಲಿ ಕಲಿತಿದ್ದರಲ್ಲಿ ಸಾಕಷ್ಟು ಅಂಶಗಳನ್ನು ಮರೆತಿರುವುದು ಅವನಿಗೆ ಅರಿವಾಯಿತು. ಹಾಗಾಗಿ ಈಗ ಹೇಳಿಕೊಡುತ್ತಿರುವುದು ಅವನಿಗೆ ಕಷ್ಟವಾಗಿ ಪರಿಣಮಿಸುತ್ತಿತ್ತು. ಅವನ ಮನೆಯಲ್ಲಿ ಇದ್ದ ಒಂದು ಬೇಸಿಕ್ ಮೊಬೈಲ್ ಫೋನ್ ಯಾವಾಗಲೂ ಅವನ ತಂದೆಯ ಬಳಿ ಇರುತ್ತಿದ್ದ ಕಾರಣ ಆನ್‌ಲೈನ್ ತರಗತಿಗಳಿಗೆ ಹಾಜರಾಗಲು ಅವನಿಗೆ ಆಗಲಿಲ್ಲ.

ಪ್ರತಿ ದಿನ ಕರೀಮ್ಗೆ ಎರಡನೇ ತರಗತಿಯ ಪಾಠಗಳನ್ನು ಓದುವುದು, ಅಭ್ಯಾಸ ಮಾಡುವ ಅವಕಾಶ ಸಿಕ್ಕಿದಾಗಲೆಲ್ಲಾ, ಒಂದನೇ ತರಗತಿಯ ಎಲ್ಲಾ ಪಾಠಗಳನ್ನು ಅರ್ಥ ಮಾಡಿಕೊಳ್ಳಲು ಕಠಿಣ ಪ್ರಯತ್ನ ಮಾಡಬೇಕಾಗಿತ್ತು ಎಂದು ಯೋಚಿಸುವುದೇ ನೋವಿನ ಸಂಗತಿಯಾಗಿತ್ತು. ಸಂಕಲನ, ವ್ಯವಕಲನ, ಗುಣಾಕಾರ ಮತ್ತು ಭಾಗಾಕಾರಗಳು ಅವನಿಗೆ ಕಷ್ಟವಾಗತೊಡಗಿದವು. ಪಠ್ಯಪುಸ್ತಕ ಆಧರಿತ ಪ್ರಶ್ನೆಗಳನ್ನು ಉತ್ತರಿಸುವುದು ಅವನಿಂದಾಗಲಿಲ್ಲ. ಪಠ್ಯಪುಸ್ತಕ ಆಧರಿತ ಸಮಸ್ಯೆಗಳನ್ನು ಬಿಡಿಸುವುದು ಎಂದರೆ ಬರಿಯ ಗಣಿತವಷ್ಟೇ ಆಗಿರದೆ, ಭಾಷಾ ಕಲಿಕೆಯೂ ಆಗಿತ್ತು.

2021ರ ಏಪ್ರಿಲ್‌ನಲ್ಲಿ ಕರೀಮ್ ಮೂರನೇ ತರಗತಿಗೆ ಉತ್ತೀರ್ಣನಾದ. ಒಂದನೇ ತರಗತಿಯಲ್ಲಿ ಕಲಿತದ್ದನ್ನು ಮೂರನೇ ತರಗತಿಯಲ್ಲಿ ಅಡಿಪಾಯವಾಗಿ ಬಳಸಿಕೊಳ್ಳಲು ಅವನಿಗೆ ಕಷ್ಟವಾಯಿತು.

ಮೂರನೇ ತರಗತಿಗೆ ಅವಶ್ಯವಾಗಿದ್ದ ಕಲಿಕೆ ಮತ್ತು ಅರ್ಥೈಸುವಿಕೆ ಕರೀಮ್ನಿಂದಾಗಲಿಲ್ಲ. ಅಲ್ಲದೆ, ಮೂರನೇ ತರಗತಿಯ ಪಠ್ಯಕ್ರಮದಲ್ಲಿ ಪರಿಸರ ಅಧ್ಯಯನ (ಇವಿಎಸ್) ಎಂಬ ವಿಷಯವೂ ಸೇರಿಕೊಂಡಿತ್ತು. ಅವನಿಗೆ ಏನೇನೂ ಗೊತ್ತಿರದ ಅನೇಕ ಸಂಗತಿಗಳು ಮತ್ತು ಪರಿಕಲ್ಪನೆಗಳನ್ನು ಈ ವಿಷಯ ಒಳಗೊಂಡಿತ್ತು.

**ಶಿಕ್ಷಕರು ಎದುರಿಸಿದ ಸವಾಲುಗಳು**

ಶಿಕ್ಷಕರಿಗೂ ಈ ಎಲ್ಲಾ ಸಮಸ್ಯೆಗಳು ಎದುರಾದವು. ಎಷ್ಟೋ ಬಾರಿ, ಒಂದು ಗ್ರಾಮ ಅಥವಾ ಪ್ರದೇಶ ಕಂಟೈನ್‌ಮೆಂಟ್ ವಲಯವಾಗಿ ಮಾರ್ಪಾಡಾಗುತ್ತಿತ್ತು ಮತ್ತು ಮಕ್ಕಳು ತರಗತಿಗಾಗಿ ಒಂದೆಡೆ ಸೇರುವುದಕ್ಕೆ ಸಮುದಾಯ ಅನುಮತಿ ನೀಡುತ್ತಿರಲಿಲ್ಲ. ಸಮುದಾಯ ತರಗತಿಗಳಿಗೆ ಮಕ್ಕಳನ್ನು ಕಳುಹಿಸಿಕೊಡಲು ಪೋಷಕರೂ ಒಪ್ಪುತ್ತಿರಲಿಲ್ಲ. ಆದರೂ, ಮಕ್ಕಳಿಗೆ ಕಲಿಕೆಯ ಸಾಧ್ಯತೆಯಿರುವ ಎಲ್ಲಾ ಅವಕಾಶಗಳನ್ನು ಒದಗಿಸಿಕೊಡಲು ಶಿಕ್ಷಕರು ಶಕ್ತಿಮೀರಿ ಪ್ರಯತ್ನಿಸಿದರು. ಆದರೂ, ತರಗತಿ ಕೋಣೆಯಲ್ಲಿ ದಿನಕ್ಕೆ ಐದರಿಂದ ಆರು ಗಂಟೆ ನಡೆಯುವ ಬೋಧನೆ-ಕಲಿಕೆಗೆ ಪರ್ಯಾಯ ಬೇರೆ ಯಾವುದೂ ಇಲ್ಲ ಎಂಬುದು ನಮಗೂ ತಿಳಿದಿದೆ. ತರತಿಯಲ್ಲಿ ಮಕ್ಕಳು ಒಬ್ಬರಿಗೊಬ್ಬರು ಮಾತನಾಡುತ್ತಾರೆ ಹಾಗೂ ತರಗತಿ ಎಂಬ ವ್ಯವಸ್ಥೆಯು ಅವರನ್ನು ಕಲಿಯುವಂತೆ ಪ್ರೇರೇಪಿಸುತ್ತದೆ. ಒಂದು ಮಗು ತನ್ನ ಅನುಭವವನ್ನು ತನ್ನ ತರಗತಿಯಲ್ಲಿ ಹಂಚಿಕೊಂಡಾಗ, ಅವಳು ತನಗೆ ತಾನೇ ಹಲವಾರು ಭಾವನೆಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಾಳೆ, ಆದರೆ ಅವಳ ಮಾತುಗಳನ್ನು ಆಲಿಸುವ ಬೇರೆ ಮಕ್ಕಳು ಆ ಅನುಭವಗಳನ್ನು ತಮಗೆ ಕಲ್ಪಿಸಿಕೊಳ್ಳುತ್ತಾರೆ ಮತ್ತು ಈ ಇಡೀ ಪ್ರಕ್ರಿಯೆಯಲ್ಲಿ ಪರಸ್ಪರರ ಭಾವನೆಗಳನ್ನು ಅರ್ಥ ಮಾಡಿಕೊಳ್ಳುತ್ತಾರೆ.

ಕರೀಮನ ಉದಾಹರಣೆ ಪ್ರಾಥಮಿಕ ಹಂತದ ವಿದ್ಯಾರ್ಥಿಯದ್ದೇ ಆಗಿರಬಹುದು ಆದರೆ ಹಿರಿಯ ಪ್ರಾಥಮಿಕ ಹಂತದ ವಿದ್ಯಾರ್ಥಿಗಳ ಸಮಸ್ಯೆಗಳ ಬಗ್ಗೆ ಗಮನ ಕೊಡಬೇಕಾಗುತ್ತದೆ. 2020ರ ಮಾರ್ಚ್‌ನಲ್ಲಿ ನಾಲ್ಕನೇ ತರಗತಿಯಲ್ಲಿ ಇದ್ದ ಹಲವು ಮಕ್ಕಳೂ ಈಗ ಆರನೇ ತರಗತಿಯಲ್ಲಿದ್ದು, ಅವರ ಸಂದರ್ಭದಲ್ಲಿಯೂ ಅಂತಹುದೇ ಸಮಸ್ಯೆಗಳು ಈಗ ಬೆಳಕಿಗೆ ಬರುತ್ತಿವೆ. ಕರೀಮನಂತೆಯೇ ಅವರೂ ಕೂಡಾ ಕಲಿಕಾ ಅಂತರದ ಪರಿಣಾಮವನ್ನು ಅನುಭವಿಸುತ್ತಿದ್ದಾರೆ. ಕರೀಮನಿಗೆ ಹೋಲಿಸಿದರೆ ಅವರು ಶಾಲೆಗೆ ಸ್ವಲ್ಪ ಹೆಚ್ಚು ಬಂದಿರಬಹುದು ಆದರೆ ಕರೀಮನಂತೆಯೇ ಅವರೂ ಪರಿಕಲ್ಪನೆಗಳನ್ನು

ಮರೆತಿದ್ದಾರೆ. ನಾವು ಈಗ ಹಿರಿಯ ಪ್ರಾಥಮಿಕ ಶಾಲಾ ಹಂತದ ವಿದ್ಯಾರ್ಥಿಗಳೊಂದಿಗೆ ಮಾತ್ರ ನಿರಂತರ ಮತ್ತು ನೇರವಾಗಿ ಕೆಲಸ ಮಾಡುವ ಅವಕಾಶ ಪಡೆದಿದ್ದೇವೆ. ಕಿರಿಯ ಪ್ರಾಥಮಿಕ ಮಕ್ಕಳೊಂದಿಗೆ ಸಮುದಾಯ ಕಲಿಕಾ ಕೇಂದ್ರಗಳ ಮೂಲಕವಷ್ಟೇ ಈ ಕೆಲಸ ಸಾಧ್ಯವಾಗಿದ್ದು, ಈ ಕೇಂದ್ರಗಳು ನಿಯಮಿತವಾಗಿ ನಡೆಯುತ್ತಿಲ್ಲ ಎಂಬ ಸಮಸ್ಯೆಯನ್ನು ಎದುರಿಸುತ್ತಿವೆ.

**ಶಾಲೆಗಳಲ್ಲಿ ನನ್ನ ಅನುಭವಗಳು**

ನನ್ನ ವೈಯಕ್ತಿಕ ಅನುಭವಗಳು ಛತ್ತೀಸಗಡದ ಧಾಮ್‌ತರಿ ಮತ್ತು ಉತ್ತರಾಖಂಡದ ಉಧಮ್‌ಸಿಂಗ್ ನಗರದ ದಿನೇಶ್‌ಪುರದ ಶಾಲೆಗಳಿಗೆ ಸಂಬಂಧಿಸಿದವಾಗಿವೆ. ಈ ಎರಡೂ ಸ್ಥಳಗಳಲ್ಲಿ ಬೋಧನೆ- ಕಲಿಕೆ ಪ್ರಕ್ರಿಯೆಗಳು ಹಿರಿಯ ಪ್ರಾಥಮಿಕ ಹಂತದಲ್ಲಿ ನಡೆದಿವೆ.

ಧಾಮ್‌ತರಿಯಲ್ಲಿ ಶಾಲೆಗಳು ಪುನರಾರಂಭವಾಗಿಲ್ಲ ಆದರೆ ಮಕ್ಕಳಿಗೆ ಬೋಧನೆ-ಕಲಿಕೆಯ ಪ್ರಕ್ರಿಯೆ ನಿರಂತರವಾಗಿ ನಡೆಯುವಂತೆ ಶಕ್ತಿ ಮೀರಿ ಪ್ರಯತ್ನಿಸಲಾಗುತ್ತಿದೆ. ಪ್ರಾಥಮಿಕ ಹಂತದಲ್ಲಿ, ಶಿಕ್ಷಕರು ಮಕ್ಕಳಿಗೆ ಮನೆಯಲ್ಲಿ ಅಥವಾ ಸಮುದಾಯ ಕಲಿಕಾ ಕೇಂದ್ರಗಳ ಮೂಲಕ ಪಾಠ ಹೇಳಿಕೊಡುವುದನ್ನು ಮುಂದುವರಿಸಿದ್ದಾರೆ. ಪ್ರತಿ ಪಾಠ ಮತ್ತು ಪರಿಕಲ್ಪನೆಗಳನ್ನು ವರ್ಕ್‌ಶೀಟ್ ಮೂಲಕ ಹೇಳಿಕೊಡಲಾಗುತ್ತಿದೆ. ಅಲ್ಲದೆ, ಈ ವರ್ಕ್‌ಶೀಟ್‌ಗಳ ಮೂಲಕ ಅವರು ಕಠಿಣ ವಿಷಯಗಳನ್ನು ನಿಖರವಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾರೆ ಎಂಬುದನ್ನು, ವರ್ಕ್‌ಶೀಟ್ ಮತ್ತು ಉತ್ತರಪತ್ರಿಕೆಗಳನ್ನು ಜೊತೆಯಾಗಿ ಕಳುಹಿಸಿಕೊಡುವ ಮೂಲಕ ಖಚಿತಪಡಿಸಿಕೊಳ್ಳಲಾಗುತ್ತಿದೆ.

17 ತಿಂಗಳುಗಳ ಬಳಿಕ ಶಾಲೆಗಳು ಪುನರಾರಂಭವಾದಾಗ, ಮಕ್ಕಳು ಈ ಹಿಂದೆ ಕಲಿತಿದ್ದುದ್ದನ್ನು ಮರೆತಿರುವುದನ್ನು ನಾವು ಗಮನಿಸಿದ್ದೇವೆ. ಹಿರಿಯ ಪ್ರಾಥಮಿಕ ಹಂತದ ವಿದ್ಯಾರ್ಥಿಗಳಲ್ಲಿ ಇದನ್ನು ಸ್ಪಷ್ಟವಾಗಿ ಕಾಣಬಹುದಾಗಿತ್ತು. ಭಿನ್ನರಾಶಿ, ದಶಮಾಂಶಗಳು ಇವೇ ಮುಂತಾದ ಗಣಿತದ ಮೂಲ ಪರಿಕಲ್ಪನೆಗಳನ್ನು ಒಂದೋ ಸಂಪೂರ್ಣವಾಗಿ ಮರೆತಿದ್ದಾರೆ ಇಲ್ಲವೇ ಅವುಗಳಲ್ಲಿ ಅವರು ಮಾಮೂಲು ತಪ್ಪುಗಳನ್ನು ಮಾಡುತ್ತಿದ್ದಾರೆ. ಹಾಗೆಯೇ, ಅವರ ಬರೆಯುವ ಮತ್ತು ಓದುವ ಕೌಶಲದಲ್ಲಿಯೂ ತಪ್ಪುಗಳ ಸರಮಾಲೆಯೇ ಇತ್ತು. ಪದಗಳನ್ನು ಗುರುತಿಸುವಲ್ಲಿ ಮತ್ತು ಬರವಣಿಗೆಯಲ್ಲಿ ಹಲವಾರು ತಪ್ಪುಗಳಾಗುತ್ತಿದ್ದವು. ಇಂಗ್ಲಿಷ್ ಮತ್ತು ಹಿಂದಿಯಲ್ಲಿ ಈ ಸಮಸ್ಯೆ ಹೆಚ್ಚಾಗಿತ್ತು.

**ಸವಾಲುಗಳನ್ನು ಗುರುತಿಸುವುದು**

ಈ ಸಮಸ್ಯೆಗಳನ್ನು ನಿಭಾಯಿಸುವ ಸಲುವಾಗಿ ನಾವು ರೂಬಿಕ್ಸ್ ಪರಿಭಾಷೆಯನ್ನು ಸೃಷ್ಟಿಸಿ, ಗಣಿತದ ಕಲಿಕೆಯಲ್ಲಿನ ಫಲಿತಾಂಶವನ್ನು ಗಮನಿಸಲು ಒಂದು ಪ್ರಯತ್ನವನ್ನು ಮಾಡಿದೆವು. ರೂಬಿಕ್ಸ್ ಭಾಷೆಯ ಆಧಾರದಲ್ಲಿ, ಒಬ್ಬ ವಿದ್ಯಾರ್ಥಿಯು ಯಾವುದನ್ನು ಕಲಿಯುವುದರಲ್ಲಿ ಯಶಸ್ವಿಯಾದ ಮತ್ತು ಆತ ಹೆಚ್ಚು ಗಮನ ಕೇಂದ್ರೀಕರಿಸಬೇಕಾದ ಅಂಶ ಯಾವುದು ಎಂಬುದನ್ನು ಪರೀಕ್ಷಿಸಲು ಸಾಧ್ಯ. ಭಾಷಾ ಕಲಿಕೆಯಲ್ಲಿ ರೂಬಿಕ್ಸ್ ಬಳಕೆಗೆ ತಜ್ಞರು ನೀಡಿರುವ ಕೋಷ್ಟಕವನ್ನು ಇಲ್ಲಿ ಕೆಳಗೆ ನೀಡಲಾಗಿದೆ.

ಮಕ್ಕಳ ತಳಮಟ್ಟದ ಮೌಲ್ಯಮಾಪನವನ್ನು ಕಲಿಕೆಯ ನಿಖರ ಫಲಿತಾಂಶ ಮತ್ತು ಸಾಮರ್ಥ್ಯದ ನೆಲೆಯಲ್ಲಿ ಮಾಡಲಾಯಿತು. ಸುಮಾರು 35 ವಿದ್ಯಾರ್ಥಿಗಳಲ್ಲಿ ಮೂಲ ಸಾಮರ್ಥ್ಯ/ಕೌಶಲದಲ್ಲಿಯೇ ತೊಂದರೆ ಎದುರಿಸುತ್ತಿರುವುದು ಕಂಡುಬಂತು. ಅವರು ಒಂದೋ ಅವರ ತರಗತಿಯ ಹಂತಕ್ಕೆ ತಕ್ಕುದಾದ ಸಾಮರ್ಥ್ಯ/ಕೌಶಲವನ್ನು ಅವರು ಹೊಂದಿರಲಿಲ್ಲ ಅಥವಾ ಲಾಕ್‌ಡೌನ್ ಅವಧಿಯಲ್ಲಿ ನಿಯಮಿತ ಪಾಠ ಪ್ರವಚನಗಳಿಲ್ಲದ ಕಾರಣ ಅವರು ಮರೆತುಬಿಟ್ಟಿದ್ದರು. ಇದರ ಕಡೆ ಗಮನ ನೀಡುವ ಸಲುವಾಗಿ, ಸಾಮರ್ಥ್ಯ/ಕೌಶಲಗಳು/ಹಂತ ಎಂಬಂತಹ ಗುಂಪುಗಳನ್ನು ರಚಿಸಿ ಮಕ್ಕಳ ಸಮಸ್ಯೆಗಳನ್ನು ಗಮನಿಸಲಾಯಿತು.

**ಸಾಮರ್ಥ್ಯದ ನೆಲೆಯಲ್ಲಿ ಗುಂಪುಗಳ ರಚನೆ**

ಮೊದಲ ಗುಂಪಿನಲ್ಲಿ ಹಿಂದಿ ಭಾಷೆಯ ಮೂಲ ಕೌಶಲಗಳಲ್ಲಿ ಸಮಸ್ಯೆ ಎದುರಿಸುತ್ತಿದ್ದ 11 ವಿದ್ಯಾರ್ಥಿಗಳಿದ್ದರು. ಅಂದರೆ, ತಪ್ಪಿಲ್ಲದೆ ಅಕ್ಷರಗಳ ಗುರುತಿಸುವುದು, ಬರೆಯುವುದು ಮತ್ತು ಓದುವಲ್ಲಿ ಸಮಸ್ಯೆ ಎದುರಿಸುತ್ತಿದ್ದವರು. ಎರಡನೇ ಗುಂಪಿನಲ್ಲಿ ಮೂಲ ಕೌಶಲದಲ್ಲಿ ಯಾವುದೇ ಕಷ್ಟ ಇಲ್ಲದಿದ್ದರೂ, ಬರೆಯುವುದು, ಧ್ವನಿಮಾದ ಜ್ಞಾನ ಮತ್ತು ಅರ್ಥ ಮಾಡಿಕೊಳ್ಳುವಲ್ಲಿ ವಿಫಲರಾಗುತ್ತಿದ್ದ 12 ವಿದ್ಯಾರ್ಥಿಗಳಿದ್ದರು. ಈ ಗುಂಪಿನಲ್ಲಿ ಹಿಂದಿ ಪ್ರಥಮ ಭಾಷೆ ಆಗಿರದ ವಿದ್ಯಾರ್ಥಿಗಳೂ ಇದ್ದರು ಹಾಗೂ ಹಿಂದಿಯ 'ಬ' ಮತ್ತು 'ವ' ಅಥವಾ 'ರ' ಮತ್ತು 'ಡ'ವನ್ನು ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ.

ಹಾಗೆಯೇ, ಗಣಿತದಲ್ಲಿ, ಮೂಲ ಕೌಶಲದಲ್ಲಿ ಕಷ್ಟ ಎದುರಿಸುತ್ತಿದ್ದ 12 ಮಕ್ಕಳ ಒಂದು ಗುಂಪು ಮಾಡಲಾಯಿತು. ಸಂಖ್ಯೆ ಗುರುತಿಸುವುದು, ಸಂಖ್ಯೆಯ ನಮೂನೆಯನ್ನು ಅರ್ಥ ಮಾಡಿಕೊಳ್ಳುವುದು, ಮೂಲ ಸೂತ್ರಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಅವರಿಗೆ ಸಮಸ್ಯೆಯಾಗುತ್ತಿತ್ತು. ಎರಡನೇ ಗುಂಪಿನಲ್ಲಿ

ಮೂರರಿಂದ ಐದನೇ ತರಗತಿವರೆಗಿನ ಗಣಿತದಲ್ಲಿ ಸಮಸ್ಯೆ ಎದುರಿಸುತ್ತಿದ್ದವರು ಇದ್ದರು. ಇದಲ್ಲದೆ, ಅವರಿಗೆ ಭಾಷೆಯ ಸವಾಲುಗಳೂ ಇದ್ದುದರಿಂದ ಪಠ್ಯ ಆಧಾರಿತ ಪ್ರಶ್ನೆಗಳಲ್ಲಿ ಕಷ್ಟ ಅನುಭವಿಸುತ್ತಿದ್ದರು.

ಈ ಗುಂಪುಗಳನ್ನು ಗಮನದಲ್ಲಿಟ್ಟುಕೊಂಡು, ಶಿಕ್ಷಕರು ಬೋಧನೆ-ಕಲಿಕೆಯ ಯೋಜನೆಯೊಂದನ್ನು ರೂಪಿಸಿದರು. ಈ ಕೆಲಸದಲ್ಲಿ ಹಿರಿಯ ಪ್ರಾಥಮಿಕ ಹಂತದ ಎಲ್ಲಾ ಶಿಕ್ಷಕರೂ ಪಾಲ್ಗೊಂಡಿದ್ದರು. ಪ್ರತಿಯೊಬ್ಬ ಶಿಕ್ಷಕರೂ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು, ಇಬ್ಬರು ಅಥವಾ ಮೂವರು ವಿದ್ಯಾರ್ಥಿಗಳ ವೈಯಕ್ತಿಕ ಸಮಸ್ಯೆಯತ್ತ ಗಮನ ನೀಡಿದರು. ಈ ಪ್ರಕ್ರಿಯೆಯ ವೇಳೆ, ವಿದ್ಯಾರ್ಥಿಗಳ ಬಗ್ಗೆ ನಾವು ಗಮನಿಸಿದ ಆಕರ್ಷಕ ಸಂಗತಿ ಎಂದರೆ, ಅವರೆಲ್ಲರಿಗೂ ಕಲಿಕೆಯ ಬಗ್ಗೆ ಅಪಾರ ಆಸಕ್ತಿ ಇತ್ತು! ಆದರೆ, ಶಾಲೆಯ ದೈನಂದಿನ ಒತ್ತಡ ಹಾಗೂ ಇತರ ಕಾರಣಗಳ ಹಿನ್ನೆಲೆಯಲ್ಲಿ ಅವರಿಗೆ ಓದಿನ ಕಡೆಗೆ ಹೆಚ್ಚು ಗಮನ ನೀಡಲು ಆಗುತ್ತಿರಲಿಲ್ಲ. ಆದರೆ ಅದೇ ಒಂದು ಕತೆ  ಮುಂದಿನ ಸಲ ಹೇಳೋಣ.

ಸಮಸ್ಯೆಗಳು ಧಾಮ್‌ತರಿ ಮತ್ತು ದಿನೇಶ್‌ಪುರ ಶಾಲೆಗಳಲ್ಲಿ ಒಂದೇ ತೆರನಾಗಿದ್ದವು. ಆದ್ದರಿಂದ, ಎರಡೂ ಕಡೆಗಳಲ್ಲಿ ಬಹುತೇಕ ಒಂದೇ ಬಗೆಯ ವಿಧಾನ ಹಾಗೂ ಕಾರ್ಯಕ್ರಮಗಳನ್ನು ಹಮಿಕೊಳ್ಳಲಾಯಿತು. ಸುಮಾರು ಎರಡು ತಿಂಗಳ ನಂತರ ಶೇಕಡಾ 50ರಷ್ಟು ವಿದ್ಯಾರ್ಥಿಗಳು ತಮ್ಮ ಸಮಸ್ಯೆಯಿಂದ ಹೊರಬಂದರು ನಮ್ಮ ಕಾರ್ಯಯೋಜನೆಯ ಪ್ರಗತಿ ಸ್ಪಷ್ಟವಾಯಿತು.

ಮೊದಲ ಪ್ರಯತ್ನದಲ್ಲಿ, ಮೂಲ ಕೌಶಲ/ಸಾಮರ್ಥ್ಯದಲ್ಲಿ ಅಂದರೆ, ಸಂಖ್ಯೆಗಳು, ಸ್ಥಾನಬೆಲೆ, ಮೂಲ ನಿಯಮಗಳು, ಅಕ್ಷರಗಳ ಗುರುತಿಸುವಿಕೆ, ಓದುವ ಮತ್ತು ಬರೆಯುವ ಸಾಮರ್ಥ್ಯ, ಕೇಳಿಸಿಕೊಂಡಿದ್ದನ್ನು ಬರೆಯುವ ಸಾಮರ್ಥ್ಯದಲ್ಲಿ ಕೊರತೆ ಎದುರಿಸುತ್ತಿದ್ದ 23 ವಿದ್ಯಾರ್ಥಿಗಳು ಇದ್ದರು. ಎರಡು ತಿಂಗಳ ಬಳಿಕ, ಈ ಪೈಕಿ ಸುಮಾರು 17-18 ಮಂದಿ ಒಂದೋ ಈ ಸಮಸ್ಯೆಗಳಿಂದ ಹೊರಬಂದರು ಇಲ್ಲವೇ ಆ ಹಂತ ತಲುಪಿದ್ದರು. ಕೆಲವು ಮಕ್ಕಳು ಇನ್ನೂ ಅಂತಹ ಸಮಸ್ಯೆಯನ್ನು ಎದುರಿಸುತ್ತಿದ್ದರೂ ಅವರಲ್ಲಿಯೂ ಬದಲಾವಣೆಗಳನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ಅವರೂ ಕೂಡ ಯಶಸ್ಸು ಗಳಿಸುತ್ತಾರೆ ಎಂಬುದು ನಮ್ಮ ನಿರೀಕ್ಷೆ.

**ಬೋಧನೆ-ಕಲಿಕೆಯ ಪ್ರಕ್ರಿಯೆ**

ಭಾಷಾ ಗುಂಪಿನಲ್ಲಿ ದಿಗಂತರ್[1] ಅವರ ಹಳೆಯ ಪ್ಯಾಕೇಜ್ ಆದ 'ಸಹಜ್ ಪಠಣ್'ನ್ನು ಬಳಸಲಾಯಿತು.

ಈ ಪ್ಯಾಕೇಜ್‌ನಲ್ಲಿ ಸುಮಾರು ಆರು ಕತೆಗಳ ಸುತ್ತ  ಓದುವ ಮತ್ತು ಬರೆಯುವ ಚಟುವಟಿಕೆಗಳನ್ನು ನೀಡಲಾಗಿದೆ. ಈ ಪ್ಯಾಕೇಜ್ 3, 4, 5ನೇ ತರಗತಿಗೆ ಆಗಿದ್ದರೂ ನಾವು ಕೆಲವು ಮಾರ್ಪಾಡುಗಳೊಂದಿಗೆ ಅದನ್ನು ಬಳಸಿಕೊಂಡೆವು. ಕೆಲವು ಕತೆಗಳನ್ನು ಬದಲಾಯಿಸಿದೆವು, ಕೆಲವು ಕಡೆ ಹೊಸದನ್ನು ಸೇರಿಸಿದೆವು ಮತ್ತು ಕೆಲವು ಅಭ್ಯಾಸಗಳನ್ನು ಸೇರಿಸಿದೆವು. ಭಾಷಾ ಗುಂಪಿನ ಎಲ್ಲಾ 11 ವಿದ್ಯಾರ್ಥಿಗಳೂ ಇದರಲ್ಲಿ ಆಸಕ್ತಿ ತೋರಿಸಿದರು. ಈ ಮೂಲಕ ಅವರು ಬಹಳ ಬೇಗನೆ ಅಕ್ಷರಗಳನ್ನು ಗುರುತಿಸುವ ಕೌಶಲ, ತಪ್ಪಿಲ್ಲದೆ ಬರೆಯುವ ಮತ್ತು ಓದುವ ಕೌಶಲವನ್ನು ಬೆಳೆಸಿಕೊಂಡರು.

ಈ ಪ್ಯಾಕೇಜ್‌ನಲ್ಲಿ, ಪ್ರತಿ ಕತೆಗೂ ಒಂದು ಭಿತ್ತಿಪತ್ರ, ಕತೆಯ ಪ್ರತಿ ವಾಕ್ಯದ ಪಟ್ಟಿ, ಪ್ರತಿ ಶಬ್ದದ ಕಾರ್ಡ್ ಬಳಸಲಾಗಿತ್ತು. ನಿಯಮಿತವಾಗಿ, ಕತೆಯನ್ನು ಮೊದಲು ವಿವರಿಸಲಾಗುತ್ತಿತ್ತು. ಆಮೇಲೆ ವಿದ್ಯಾರ್ಥಿಗಳು ಬೆರಳಿಟ್ಟು ಓದಲು, ಕತೆಯ ವಾಕ್ಯ ಮತ್ತು ಕಾರ್ಡ್‌ನಲ್ಲಿನ ಶಬ್ದಗಳನ್ನು ಓದಲು ಸಹಕಾರಿಯಾಗುವಂತೆ ಎಲ್ಲವನ್ನೂ ಕತೆಗೆ ಅನುಸಾರವಾಗಿ ಕ್ರಮಬದ್ಧವಾಗಿ ಜೋಡಿಸಿ ಇಡಲಾಗುತ್ತಿತ್ತು. ಹೀಗೆ, ಕತೆ ಓದುವ ಮತ್ತು ಭಿತ್ತಿಪತ್ರ ಮತ್ತು ಕಾರ್ಡ್‌ಗಳ ಮೂಲಕ ಕತೆಯ ಸನ್ನಿವೇಶಗಳನ್ನು ಮರುಸೃಷ್ಟಿ ಮಾಡುವ ಪ್ರಕ್ರಿಯೆ ಪ್ರತಿದಿನವೂ ಪ್ರತಿಯೊಬ್ಬ ವಿದ್ಯಾರ್ಥಿಗೂ ತಪ್ಪದೇ ನಡೆಯುತ್ತಿತ್ತು. ಇದರ ಹೊರತಾಗಿ, ಕತೆಯನ್ನು ಆಧರಿಸಿದ ವರ್ಕ್‌ಶೀಟ್‌ಗಳನ್ನೂ ವಿದ್ಯಾರ್ಥಿಗಳು ಸಮರ್ಪಕವಾಗಿ ಬಗೆಹರಿಸಿದರು. ವರ್ಕ್‌ಶೀಟ್‌ನಲ್ಲಿ, ಕತೆಗೆ ಸಂಬಂಧಿಸಿದ ಕೆಲವು ಶಬ್ದಗಳನ್ನು ಕೈಬಿಡಲಾಗಿರುತ್ತಿತ್ತು, ಅವುಗಳನ್ನು ತುಂಬಿ ಕತೆಯನ್ನು ಪೂರ್ತಿಗೊಳಿಸುವಂತೆ ವಿದ್ಯಾರ್ಥಿಗಳಿಗೆ ತಿಳಿಸಲಾಗುತ್ತಿತ್ತು.

ಕತೆಯಲ್ಲಿ ಇಲ್ಲದ ಶಬ್ದಗಳನ್ನು ಪ್ರತಿ ಕತೆಯ ಕಾರ್ಡ್‌ನಲ್ಲಿ ಬರೆಯುವ ಮೂಲಕ ವಾಕ್ಯ ರಚನೆಗೆ ಅವಕಾಶ ಮಾಡುತ್ತಿದ್ದೆವು. ಹೊಸ ಮತ್ತು ಕತೆಯಲ್ಲಿದ್ದ ಪದಗಳನ್ನು ಗುರುತಿಸಿ ಅವುಗಳನ್ನು ಬರೆದು, ಪದಗಳ ಧ್ವನಿಮಾ ಗುರುತಿಸುವುದು ಮತ್ತು ಅವುಗಳ ಸಹಾಯದಿಂದ ವಾಕ್ಯ ರಚಿಸುವುದು ಮುಂತಾದ ಚಟುವಟಿಕೆಯಲ್ಲಿ ಎಲ್ಲಾ ಮಕ್ಕಳು ಬಹಳ ಆಸಕ್ತಿ ವಹಿಸುತ್ತಿದ್ದರು. ಎರಡು ತಿಂಗಳ ಅಂತರದ ಬಳಿಕ, 11ರಲ್ಲಿ 8  ಮಕ್ಕಳು ನಾಲ್ಕನೇ ತರಗತಿಯ 'ಬರ್ಖಾ' ಸರಣಿಯ ಪಠ್ಯಪುಸ್ತಕವನ್ನು ಆರಾಮವಾಗಿ ಓದಲು ಮತ್ತು ಅವುಗಳಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸಲು ಶಕ್ತರಾದರು.

ಬೇರೆ ಭಾಷಾ ಗುಂಪಿನಲ್ಲಿ 12 ವಿದ್ಯಾರ್ಥಿಗಳಿದ್ದರು. ಅವರ ಸಮಸ್ಯೆ ಬೇರೆಯದೇ ರೀತಿಯದ್ದಾಗಿತ್ತು. ಉದಾಹರಣೆಗೆ, ಬೇರೆ ಪ್ರಥಮ ಭಾಷೆ ಹೊಂದಿದ್ದ ಮಕ್ಕಳಿಗೆ ವ್ಯಾಕರಣ ಸಂಬಂಧ ಹೆಚ್ಚಿನ ಗಮನ ನೀಡಬೇಕಾಗುತ್ತಿತ್ತು. ಇದನ್ನು ಮಾಡಬೇಕಾದರೆ, ಒಂದಿಬ್ಬರು ಮಕ್ಕಳನ್ನು ಆರಿಸಿಕೊಂಡು ಅವರಿಗೆ

ವೈಯಕ್ತಿಕ ಗಮನ ನೀಡಿ ಅವರಿಗೆ ಅಭ್ಯಾಸ ಮತ್ತು ವರ್ಕ್‌ಶೀಟ್‌ಗಳನ್ನು ನೀಡುವ ಮೂಲಕ ಸಮಸ್ಯೆ ಬಗೆಹರಿಸಿದರು. ಈ ಪ್ರಯತ್ನದಲ್ಲಿಯೂ, ಕಳೆದ ಎರಡು ತಿಂಗಳ ಅವಧಿಯಲ್ಲಿ ಸುಮಾರು 50 ಶೇಕಡಾದಷ್ಟು ಸಮಸ್ಯೆ ಬಗೆಹರಿಯಿತು.

**ಸಾರಾಂಶ**

ಕಳೆದ ಎರಡು ತಿಂಗಳ ಅನುಭವದ ಆಧಾರದಲ್ಲಿ ಹೇಳುವುದಾದರೆ, ವಿದ್ಯಾರ್ಥಿಗಳಿಗೆ ಸ್ಪಷ್ಟವಾಗಿ ವಿವರಿಸಿ, ಯೋಜಿತವಾಗಿ ಮತ್ತು ನಿರಂತರವಾಗಿ ಹೇಳಿಕೊಟ್ಟರೆ- ಕಲಿಕೆಯ ಅಂತರವನ್ನು ಗುರುತಿಸಿ, ಅವುಗಳನ್ನು ಬಗೆಹರಿಸುವ ಪ್ರಯತ್ನದೊಂದಿಗೆ- ಕಲಿಕೆಯ ಅಂತರದ ಬಹುತೇಕ ಸಮಸ್ಯೆಗಳನ್ನು ನಿವಾರಿಸಬಹುದು. 6,7, 8ನೇ ತರಗತಿಯ ವಿದ್ಯಾರ್ಥಿಗಳೊಂದಿಗಿನ ನಮ್ಮ ಪ್ರಯತ್ನಗಳು ಸಮಸ್ಯೆಗಳನ್ನು ನಿವಾರಿಸುವ ನೆಲೆಯಲ್ಲಿ ಯೋಜಿತವಾಗಿ  ಮುಂದುವರಿಯಲಿವೆ. ಈ ಅವಧಿ ಮುಗಿಯುವುದರೊಳಗೆ ಎಲ್ಲಾ ವಿದ್ಯಾರ್ಥಿಗಳು ಅವರ ತರಗತಿಯ ಹಂತಕ್ಕೆ ತಕ್ಕುದಾದ ಮಟ್ಟವನ್ನು ತಲುಪುತ್ತಾರೆ ಎಂದು ನಿರೀಕ್ಷಿಸಲಾಗಿದೆ.

(* ಮಕ್ಕಳ ಗೌಪ್ಯತೆ ಕಾಪಾಡಲು ಅವರ ಹೆಸರುಗಳನ್ನು ಬದಲಾಯಿಸಲಾಗಿದೆ)

***

**ಸ್ವೀಕೃತಿ**

ದಿನೇಶ್‌ಪುರದ ಅಜೀಂ ಪ್ರೇಮ್‌ಜಿ ಶಾಲೆಯ ಪುಷ್ಪಾ ಬೋರಾ ಮತ್ತು ಶಿಪ್ರಾ ಅಗರ್‌ವಾಲ್ ಅವರು ನನ್ನ ಜೊತೆ ವಿದ್ಯಾರ್ಥಿಗಳೊಂದಿಗೆ ಕೆಲಸ ಮಾಡಿದ್ದು, ಅದನ್ನು ಮುಂದುವರಿಸಲು ಬದ್ಧರಾಗಿದ್ದಾರೆ.

**ಅಡಿಟಿಪ್ಪಣಿ**

[1]ದಿಗಂತರ್ ಶುಕ್ಲಾ ಏವಂ ಖೆಲ್ಕುಡ್ ಸಮಿತಿಯು ಜೈಪುರದ ಲಾಭ ರಹಿತ ಸಂಸ್ಥೆಯಾಗಿದ್ದು, 1978ರಿಂದಲೂ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದೆ.

**ನವನೀತ್ ಬೇಡಾರ್** ನವದೆಹಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಿಂದ ಹಿಂದಿಯಲ್ಲಿ ಪಿಎಚ್ ಡಿ ಪದವಿ ಪಡೆದಿದ್ದಾರೆ. 1999ರಿಂದಲೂ ಶಿಕ್ಷಣ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ. ಎನ್‌ಸಿಇಆರ್‌ಟಿ ದೆಹಲಿ, ದಿಗಂತರ್ ಮತ್ತು ಜೈಪುರದಲ್ಲಿ ಕೆಲಸ ಮಾಡಿದ್ದು, ಡೆಹ್ರಾಡೂನ್‌ನ ದಿ ಡೂನ್ ಸ್ಕೂಲ್‌ನಲ್ಲಿ ಅಧ್ಯಾಪನ ಮಾಡಿದ್ದಲ್ಲದೆ, ಭಾರತಿ ಫೌಂಡೇಷನ್‌ನಲ್ಲಿ ಶಿಕ್ಷಕ -ತರಬೇತುದಾರರಾಗಿ ಕಾರ್ಯ ನಿರ್ವಹಿಸಿದ್ದಾರೆ. ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಅವರು ಒಂದು ದಶಕದಿಂದಲೂ ಭಾಷಾ ಸಂಪನ್ಮೂಲ ವ್ಯಕ್ತಿ ಹಾಗೂ ಜಿಲ್ಲಾ ಮುಖ್ಯಸ್ಥರಾಗಿದ್ದಾರೆ. ಪ್ರಸ್ತುತ, ಅವರು ಉಧಮ್ ಸಿಂಗ್ ನಗರದ ದಿನೇಶ್‌ಪುರದಲ್ಲಿರುವ ಅಜೀಂ ಪ್ರೇಮ್‌ಜಿ ಶಾಲೆಯ ಪ್ರಾಂಶುಪಾಲರಾಗಿದ್ದಾರೆ. ಅವರ ಸಂಪರ್ಕಕ್ಕೆ: navneet.bedar@azimpremjifoundation.org